**ಉತ್ತರ** :– ಈ ವಚನವನ್ನೂ ಕೂಡ ಅವಿದ್ವಾಂಸನು ಕಪೋಲಕಲ್ಪನೆಯಿಂದ ರಚಿಸಿದ್ದಾನೆ. ಏಕೆಂದರೆ - ಕೈಯಲ್ಲಿ ಧನಕೊಡುವುದರಿಂದ ದಾತೃವು ಹೋಗುವನಾದರೆ, ಪಾದದ ಮೇಲೆ ಇಡುವುದರಿಂದ, ಅಥವಾ ಗಂಟುಕಟ್ಟಿಕೊಡುವುದರಿಂದ ಸ್ವರ್ಗಕ್ಕೆ ಹೋಗುವನೇ? ಆದುದರಿಂದ, ಇಂತಹ ಕಲ್ಪನೆ ಒಪ್ಪಲು ಯೋಗ್ಯವಾದುದಲ್ಲ. ಆಹುದು; ಸಂನ್ಯಾಸಿಯು ಯೋಗಕ್ಷೇಮಕ್ಕಿಂತ ಹೆಚ್ಚು ಇಟ್ಟುಕೊಂಡರೆ, ಕಳ್ಳರೇ ಮೊದಲಾದವರಿಂದ ಪೀಡಿತನಾಗಬಹುದು. ಮತ್ತು ಮೋಹಿತನೂ ಆಗಬಹುದು - ಎಂಬುದೇನೋ ಸರಿಯೇ. ಆದರೆ, ಯಾವನು ವಿದ್ವಾಂಸನಾಗಿರುತ್ತಾನೋ, ಅವನು ಅಯುಕ್ತವಾದ ವ್ಯವಹಾರವನ್ನು ಎಂದಿಗೂ ಮಾಡಲಾಗುವುದಿಲ್ಲ; ಮೋಹದಲ್ಲಿಯೂ ಸಿಕ್ಕುಕೊಳ್ಳುವುದಿಲ್ಲ. ಏಕೆಂದರೆ- ಅವನು ಮೊದಲು ಗೃಹಾಶ್ರಮದಲ್ಲಿ ಅಥವಾ ಪೂರ್ವಾಶ್ರಮದಲ್ಲಿ ಎಲ್ಲವನ್ನೂ ಅನುಭವಿಸಿರುತ್ತಾನೆ; ಅಥವಾ ಎಲ್ಲವನ್ನೂ ಕಂಡಿರುತ್ತಾನೆ. ಮತ್ತು ಯಾವನು ಬ್ರಹ್ಮಚರ್ಯದಿಂದಲೇ (ಸಂನ್ಯಾಸಿ) ಆಗಿರುತ್ತಾನೋ, ಅವನು ಪೂರ್ಣ ವೈರಾಗ್ಯಯುಕ್ತನಾಗಿರುವುದರಿಂದ ಎಂದಿಗೂ ಮೋಹಕ್ಕೆ ಸಿಕ್ಕುಕೊಳ್ಳುವುದಿಲ್ಲ.

**ಪ್ರಶ್ನೆ** :– ಶ್ರಾದ್ಧದಲ್ಲಿ ಸಂನ್ಯಾಸಿಯು ಬಂದರೆ, ಅಥವಾ (ಅವನಿಗೆ) ಊಟ ಮಾಡಿಸಿದರೆ, ಪಿತೃಗಳು ಓಡಿ ಹೋಗುವರು ಮತ್ತು ನರಕದಲ್ಲಿ ಬೀಳುವರು - ಎಂದು ಜನರು ಹೇಳುತ್ತಾರೆ.

**ಉತ್ತರ** :– ಮೊದಲಾಗಿ, ಮೃತರಾದ ಪಿತೃಗಳ ಆಗಮನ ಮತ್ತು ಮಾಡಲ್ಪಟ್ಟ ಶ್ರಾದ್ಧ ಮೃತರಾದ ಪಿತೃಗಳಿಗೆ ಲಭಿಸುವುದೇ ಅಸಂಭವ ಮತ್ತು ವೇದಗಳಿಗೆ ಹಾಗೂ ಯುಕ್ತಿಗೆ ವಿರುದ್ಧವಾಗಿರುವುದರಿಂದ ಮಿಥ್ಯೆಯಾಗಿದೆ. ಮತ್ತು ಬರುವುದೇ ಇಲ್ಲವಾದಾಗ, ಓಡಿಹೋಗುವವರು ಯಾರು? ತಮ್ಮ ಪಾಪ - ಪುಣ್ಯಗಳಿಗನುಸಾರವಾಗಿ, ಈಶ್ವರನ ವ್ಯವಸ್ಥೆಯಿಂದ ಮರಣಾನಂತರ ಜೀವರು ಜನ್ಮವೆತ್ತುವಾಗ, ಅವರ ಬರುವಿಕೆ ಹೇಗೆ ಸಾಧ್ಯವಾಗಬಲ್ಲದು? ಆದುದರಿಂದ , ಈ ಮಾತೂ ಕೂಡ ಉದರಾರ್ಥಿಗಳಾದ ಪೌರಾಣಿಕರ ಮತ್ತು ವೈರಾಗಿಗಳ ಮಿಥ್ಯಾ ಕಲ್ಪನೆಯೇ ಆಗಿದೆ. ಆಹುದು ; ಎಲ್ಲಿ ಸಂನ್ಯಾಸಿಗಳು ಹೋಗುವರೋ ಅಲ್ಲಿ, ಈ ಮೃತರ ಶ್ರಾದ್ಧದ ಮಾಡುವಿಕೆ ಎಂಬ ಪಾಷಂಡ ವೇದಗಳೇ ಮೊದಲಾದ ಶಾಸ್ತ್ರಗಳಿಗೆ ವಿರುದ್ಧವಾಗಿರುವುದರಿಂದ, ದೂರಕ್ಕೆ ಓಡಿಹೋಗುವುದು - ಎಂಬುದೇನೋ ಸರಿ.

**ಪ್ರಶ್ನೆ**:– ಯಾವನು ಬ್ರಹ್ಮಚರ್ಯದಿಂದ ಸಂನ್ಯಾಸ ತೆಗೆದುಕೊಳ್ಳುವನೋ, ಅವನ ನಿರ್ವಾಹ ಕಷ್ಟದಿಂದ ಆಗುವುದು ಮತ್ತು ಕಾಮದ ನಿರೋಧವೂ ಕೂಡ ಅತಿ ಕಠಿಣವಾಗಿರುತ್ತದೆ. ಆದುದರಿಂದ ಗೃಹಾಶ್ರಮ, ವಾನಪ್ರಸ್ಥ - ಇವನ್ನು ನಿರ್ವಹಿಸಿ, ಯಾವಾಗ ವೃದ್ಧನಾಗುವನೋ, ಆಗಲೇ ಸಂನ್ಯಾಸ ತೆಗೆದುಕೊಳ್ಳುವುದು ಒಳ್ಳೆಯದಾಗಿರುತ್ತದೆ.

**ಉತ್ತರ**:– ಯಾವನು ನಿರ್ವಹಿಸಲಾರನೋ, ಇಂದ್ರಿಯಗಳನ್ನು ನಿಗ್ರಹಿಸಲಾರನೋ, ಅವನು ಬ್ರಹ್ಮಚರ್ಯದಿಂದ ಸಂನ್ಯಾಸ ತೆಗೆದುಕೊಳ್ಳಬಾರದು. ಆದರೆ ಯಾವನು ನಿಗ್ರಹಿಸಬಲ್ಲನೋ, ಅವನೇತಕ್ಕೆ ತೆಗೆದುಕೊಳ್ಳಬಾರದು? ಯಾವ ಪುರುಷನು ವಿಷಯದ ದೋಷಗಳನ್ನೂ ಮತ್ತು ವೀರ್ಯಸಂರಕ್ಷಣದ ಗುಣಗಳನ್ನೂ ತಿಳಿದಿರುತ್ತಾನೋ, ಅವನು ವಿಷಯಾಸಕ್ತನಾಗುವುದಿಲ್ಲ. ಮತ್ತು ಅವನ ವೀರ್ಯವು ವಿಚಾರವೆಂಬ ಬೆಂಕಿಗೆ ಕಟ್ಟಿಗೆಯಂತಿರುತ್ತದೆ : ಎಂದರೆ ಅದರಲ್ಲಿಯೇ ವ್ಯಯವಾಗಿ ಹೋಗುತ್ತದೆ. ಹೇಗೆ ವೈದ್ಯನ ಮತ್ತು ಔಷಧಗಳ ಆವಶ್ಯಕತೆ ರೋಗಿಗೆ ಇರುತ್ತದೋ, ಹಾಗೆ ರೋಗರಹಿತನಿಗೆ ಇರುವುದಿಲ್ಲ, ಇದೇ ರೀತಿ ಯಾವ ಪುರುಷನಿಗೆ ಅಥವಾ ಸ್ತ್ರೀಗೆ ವಿದ್ಯಾ, ಧರ್ಮವೃದ್ಧಿ ಮತ್ತು ಸಮಸ್ತ ಜಗತ್ತಿನ ಉಪಕಾರ ಮಾಡುವುದೇ ಉದ್ದೇಶ್ಯವಾಗಿರುತ್ತದೋ, ಅವನು ಅಥವಾ ಅವಳು ಪಂಚಶಿಖ ಮೊದಲಾದ ಪುರುಷರೂ ಮತ್ತು ಗಾರ್ಗಿ- ಮೊದಲಾದ ಸ್ತ್ರೀಯರೂ ಇದ್ದಂತೆ, ವಿವಾಹ ಮಾಡಿಕೊಳ್ಳುವುದೇ ಇರಬಹುದು. ಆದುದರಿಂದ ಅಧಿಕಾರಿಗಳಾಗಿರುವವರು ಸಂನ್ಯಾಸಿಗಳಾಗುವುದು ಉಚಿತವಾಗಿರುತ್ತದೆ. ಮತ್ತು ಅನಧಿಕಾರಿಯು ಸಂನ್ಯಾಸ ಸ್ವೀಕಾರ ಮಾಡುವನಾದರೆ, ತಾನೂ ಮುಳುಗುವನು; ಮತ್ತು ಅನ್ಯರನ್ನೂ ಮುಳುಗಿಸುವನು. ಹೇಗೆ ಚಕ್ರವರ್ತಿಯಾದ ರಾಜನು 'ಸಮ್ರಾಟ' ನಾಗಿರುತ್ತಾನೋ, ಹಾಗೆ ಸಂನ್ಯಾಸಿಯು 'ಪರಿವ್ರಾಟ' ನಾಗಿರುತ್ತಾನೆ, ವಿಶೇಷತಃ ರಾಜನು ತನ್ನ ದೇಶದಲ್ಲಿ ಅಥವಾ ತನ್ನ ಸಂಬಂಧಿಗಳ ನಡುವೆ ಸತ್ಕಾರವನ್ನು ಪಡೆಯುತ್ತಾನೆ ಮತ್ತು ಸಂನ್ಯಾಸಿಯು ಎಲ್ಲೆಡೆಯೂ ಪೂಜಿತನಾಗುತ್ತಾನೆ.

**ವಿದ್ವತ್ತ್ವಂ ಚ ನೃಪತ್ವಂಚ ನೈವ ತುಲ್ಯಂ ಕದಾಚನ ।**

**ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ॥**

ಇದು ಚಾಣಕ್ಯನೀತಿಶಾಸ್ತ್ರದ ಶ್ಲೋಕವಾಗಿದೆ. ವಿದ್ವಾಂಸನ ಮತ್ತು ರಾಜನ ಸಮತ್ವ ಎಂದಿಗೂ ಆಗಲಾರದು. ಏಕೆಂದರೆ - ರಾಜನು ತನ್ನ ರಾಜ್ಯದಲ್ಲಿ ಮಾತ್ರ ಮಾನ ಮತ್ತು ಸತ್ಕಾರ ಹೊಂದುತ್ತಾನೆ ಮತ್ತು ವಿದ್ವಾಂಸನು ಸರ್ವತ್ರ ಮಾನ- ಗೌರವಗಳನ್ನು ಪಡೆಯುತ್ತಾನೆ. ಆದುದರಿಂದ, ವಿದ್ಯೆ ಕಲಿಯಲು , ಸುಶಿಕ್ಷಣ ಗ್ರಹಿಸಲು ಮತ್ತು ಬಲಯುಕ್ತನಾಗುವುದೇ ಮೊದಲಾದುದಕ್ಕಾಗಿ ಬ್ರಹ್ಮಚರ್ಯ, ಎಲ್ಲ

ಬಗೆಯ ಉತ್ತಮ ವ್ಯವಹಾರಗಳನ್ನು ಸಾಧಿಸಲು ಗೃಹಸ್ಥ, ವಿಚಾರ, ಧ್ಯಾನ ಮತ್ತು ವಿಜ್ಞಾನಗಳನ್ನು ವರ್ಧಿಸಲು ತಪಶ್ಚರ್ಯೆಗಾಗಿ ವಾನಪ್ರಸ್ಥ ಮತ್ತು ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಪ್ರಚಾರ, ಧರ್ಮ ವ್ಯವಹಾರದ ಸ್ವೀಕಾರ ಮತ್ತು ದುಷ್ಟ ವ್ಯವಹಾರದ ತ್ಯಾಗ, ಸತ್ಯೋಪದೇಶ ಮತ್ತು ಸರ್ವರನ್ನೂ ಸಂದೇಹರಹಿತರನ್ನಾಗಿ ಮಾಡುವುದು - ಮೊದಲಾದುದಕ್ಕಾಗಿ ಸಂನ್ಯಾಸಾಶ್ರಮವಿರುತ್ತದೆ. ಆದರೆ, ಯಾರು ಈ ಸಂನ್ಯಾಸದ ಮುಖ್ಯ ಧರ್ಮವಾದ ಸತ್ಯೋಪದೇಶ ಮೊದಲಾದುವನ್ನು ಮಾಡುವುದಿಲ್ಲವೋ, ಅವರು ಪತಿತರು ಮತ್ತು ನರಕಗಾಮಿಗಳಾಗುತ್ತಾರೆ. ಈ ಕಾರಣದಿಂದ, ಸತ್ಯೋಪದೇಶ, ಶಂಕಾಸಮಾಧಾನ, ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಅಧ್ಯಾಪನ ಮತ್ತು ವೇದೋಕ್ತಧರ್ಮದ ವೃದ್ಧಿಯನ್ನು ಪ್ರಯತ್ನಪೂರ್ವಕವಾಗಿ ಮಾಡಿ, ಸಮಸ್ತ ಜಗತ್ತಿನ ಉನ್ನತಿಯನ್ನು ಸಾಧಿಸುವುದರಲ್ಲಿ ನಿರತರಾಗಿರುವುದು ಸಂನ್ಯಾಸಿಗಳಿಗೆ ಉಚಿತವಾಗಿದೆ.

**ಪ್ರಶ್ನೆ:-** ಯಾರು ಸಂನ್ಯಾಸಿಗಳಿಂದ ಬೇರೆಯಾದ ಸಾಧುಗಳು, ವೈರಾಗಿಗಳು, ಗೋಸಾಯಿಗಳು, ಖಾಖಿಗಳು* ಮೊದಲಾದವರು ಇದ್ದಾರೋ, ಅವರೂ ಸಂನ್ಯಾಸಾಶ್ರಮದಲ್ಲಿ ಎಣಿಸಲ್ಪಡುತ್ತಾರೋ, ಅಥವಾ ಇಲ್ಲವೋ?

**ಉತ್ತರ:-** ಇಲ್ಲ. ಏಕೆಂದರೆ - ಅವರಲ್ಲಿ ಸಂನ್ಯಾಸದ ಒಂದು ಲಕ್ಷಣವೂ ಇಲ್ಲ. ಅವರು ವೇದವಿರುದ್ಧವಾದ ಮಾರ್ಗದಲ್ಲಿ ಪ್ರವೃತ್ತರಾಗಿ, ವೇದಕ್ಕಿಂತ ಮಿಗಿಲಾಗಿ ತಮ್ಮ ಸಂಪ್ರದಾಯದ ಆಚಾರ್ಯರುಗಳ ವಚನಗಳನ್ನು ಒಪ್ಪುತ್ತಾರೆ ; ಮತ್ತು ಕೇವಲ ತಮ್ಮ ಮತದ ಪ್ರಶಂಸೆಯನ್ನು ಮಾಡುತ್ತಾರೆ. ಮಿಥ್ಯಾ ಪ್ರಪಂಚದಲ್ಲಿ ಸಿಕ್ಕಿಕೊಂಡು, ತಮ್ಮ ಸ್ವಾರ್ಥಕ್ಕಾಗಿ ಬೇರೆಯವರನ್ನೂ ತಮ್ಮ ತಮ್ಮ ಮತಗಳಲ್ಲಿ ಸಿಕ್ಕಿಸಿಕೊಳ್ಳುತ್ತಾರೆ. ಸುಧಾರಣೆ ಮಾಡುವುದಂತೂ ದೂರವೇ ಉಳಿಯಿತು; ಅದಕ್ಕೆ ಪ್ರತಿಕೂಲವಾಗಿ ಜಗತ್ತನ್ನು ಭ್ರಾಂತಿಗೆ ಸಿಕ್ಕಿಸಿ, ಅಧೋಗತಿಗೆ ಈಡುಮಾಡುತ್ತಾರೆ ಮತ್ತು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಆದುದರಿಂದ ಇವರನ್ನು ಸಂನ್ಯಾಸಾಶ್ರಮದಲ್ಲಿ ಎಣಿಸಲಾರೆವು. ಆದರೆ - ಇವರು ಪರಿಪಕ್ವ ಸ್ವಾರ್ಥಶ್ರಮಿಗಳಂತೂ ಅಹುದೇ ಅಹುದು. ಇದರಲ್ಲಿ ಏನೂ ಸಂದೇಹವಿಲ್ಲ. ಯಾವುದರಿಂದ ತಮಗೂ ಮತ್ತು ಸಮಸ್ತ ಜಗತ್ತಿಗೂ, ಈ ಲೋಕದಲ್ಲಿ - ಎಂದರೆ ಈಗಿನ ಜನ್ಮದಲ್ಲಿ, ಪರಲೋಕದಲ್ಲಿ - ಎಂದರೆ, ಮುಂದಣ ಜನ್ಮದಲ್ಲಿ, ಸ್ವರ್ಗದ - ಎಂದರೆ ಸುಖದ ಅನುಭವವನ್ನು ಉಂಟುಮಾಡುತ್ತಾರೋ, ಅಂತಹ, ಧರ್ಮದಲ್ಲಿ ಯಾರು ಸ್ವತಃ ನಡೆಯುತ್ತಾ, ಸಮಸ್ತ ಜಗತ್ತನ್ನೂ ನಡೆಯಿಸುತ್ತಾರೋ, ಆ ಧರ್ಮಾತ್ಮರಾದ ಜನರೇ ಸಂನ್ಯಾಸಿಗಳು ಮತ್ತು ಮಹಾತ್ಮರು ಆಗಿರುತ್ತಾರೆ.

ಹೀಗೆ ಸಂಕ್ಷೇಪವಾಗಿ ಸಂನ್ಯಾಸಾಶ್ರಮದ ಶಿಕ್ಷಣವನ್ನು ಬರೆದೆವು. ಈಗ ಇದರಿಂದ ಮುಂದಕ್ಕೆ ರಾಜ - ಪ್ರಜಾ ಧರ್ಮದ ವಿಷಯ ಬರೆಯಲ್ಪಡುವುದು.

**ಇತಿ ಶ್ರೀಮದ್ದಯಾಂದಸರಸ್ವತೀ ಸ್ವಾಮಿಕೃತೇ ಸತ್ಯಾರ್ಥಪ್ರಕಾಶೇ**

**ಸುಭಾಷಾವಿಭೂಷಿತೇ ವಾಸಪ್ರಸ್ಥ-ಸಂನ್ಯಾಸಾಶ್ರಮವಿಷಯೇ**

**ಪಂಚಮಃ ಸಮುಲ್ಲಾಸಃ ಸಂಪೂರ್ಣಃ**



* ಬೂದಿಬಡುಕರು, ಮಣ್ಣನ್ನು ಮೆತ್ತಿಕೊಳ್ಳುವವರು.